KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೧, ೨೦೦೯ (ಆಶ್ವಯುಜ ೯, ಶಕ ವರ್ಷ ೧೯೩೧) | ಸಂಚಿಕೆ ೩೯ |
|---|---|---|



## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಾಇ 44 ಕಾಬಾನಿ 2009, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕಾರ್ಖಾನೆಗಳ ಕಾಯ್ದೆ 1948ರ ಕಲಂ 66ರ ಉಪ ವಿಧಿ (1)(ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮೆ:ಟೊಯೋಟಾ ಕಿರ್ಲೋಸ್ಕರ್ ಮೋಟಾರ್ಸ್ ಪ್ರೈ. ಲಿಮಿಟೆಡ್, ಪ್ಲಾಟ್ ನಂ. 1, ಬಿಡದಿ ಇಂಡಸ್ಟ್ರೀಯಲ್ ಏರಿಯಾ, ರಾಮನಗರ ಜಿಲ್ಲೆ ಈ ಕಾರ್ಖಾನೆಯ ಆಡಳಿತ ವರ್ಗದವರಿಗೆ ಅವರು ಕೋರಿದಂತೆ ಅವರ ಅರ್ಜಿಯಲ್ಲಿ ನಮೂದಿಸಿದ ಮಹಿಳಾ ಕಾರ್ಮಿಕರಿಂದ ದಿನಾಂಕ:31.7.2009 ರಿಂದ 31.8.2009ರವರೆಗೆ ರಾತ್ರಿ 10.00ಗಂಟೆಯವರೆಗೆ ಕೆಲಸ ಮಾಡಿಸಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುಮತಿ ನೀಡಲಾಗಿದೆ.

1. ಎರಡನೇಯ ಪಾಳಿಯಲ್ಲಿ ಕೆಲಸ ಮಾಡಲು ಮಹಿಳಾ ಕಾರ್ಮಿಕರಿಂದ ಲಿಖಿತ ಅನುಮತಿಯನ್ನು ಪಡೆಯುವುದು.
2. ರಾತ್ರಿ 10–00 ಗಂಟೆಯವರೆಗೆ ಕೆಲಸ ನಿರ್ವಹಿಸುವ ಮಹಿಳಾ ಕಾರ್ಮಿಕರನ್ನು ಅವರವರ ಮನೆಗಳಿಗೆ ತಲುಪಿಸಲು ವಾಹನ ಸೌಕರ್ಯವನ್ನು ಒದಗಿಸುವುದು.
3. ಯಾವುದೇ ಸಂದರ್ಭದಲ್ಲಿ ಸಾಯಂಕಾಲ 7–00 ಗಂಟೆಗೆ ಹಾಜರಾಗುವ ಮಹಿಳಾ ಕಾರ್ಮಿಕರಿಗೆ ಕೆಲಸಕ್ಕೆ ಹಾಜರಾಗುವ ಮುನ್ನ ಹಾಗೂ ನಂತರ ಕೊನೆಯ ಪಕ್ಷ 9–00 ಗಂಟೆ ಕಾಲ ವಿಶ್ರಾಂತಿ ದೊರೆಯುವಂತೆ ನೋಡಿಕೊಳ್ಳುವುದು.
4. ಮಹಿಳಾ ಕಾರ್ಮಿಕರಿಂದ ಯಾವುದೇ ಸಂದರ್ಭದಲ್ಲಿ ಹೆಚ್ಚುವರಿ ಕೆಲಸ ಮಾಡಿಸಬಾರದು.
5. ವಿನಾಯಿತಿ ಅವಧಿಯಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಗೆ ಶಿಶು ಸಂರಕ್ಷಣೆ ಸೌಲಭ್ಯವನ್ನು ಅವರು ಕೆಲಸ ನಿರ್ವಹಿಸುವವರೆಗೆ ಒದಗಿಸುವುದು.
6. ಮಹಿಳಾ ಕಾರ್ಮಿಕರು ಲೈಂಗಿಕ ಕಿರುಕುಳಕ್ಕೆ ಒಳಗಾಗದಂತೆ ಎಲ್ಲಾ ಮುಂಜಾಗ್ರತಾ ಮತ್ತು ಸುರಕ್ಷತಾ ಕ್ರಮ ಕುರಿತು ಕ್ರಮ ಕೈಗೊಳ್ಳುವುದು.
7. ಸದರಿ ಸೂಚನೆಯನ್ನು ಕಾರ್ಖಾನೆ ನಾಮಫಲಕದಲ್ಲಿ ಪ್ರದರ್ಶಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಶಿವರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

ಪಿ.ಆರ್. 509

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 70 ಸಿಎನ್‌ಎಸ್ 2008, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಪುಲಕೇಶಿ ಗೂಳಪ್ಪ ಉಪನಾಳ, ಸಾ:ಲಕ್ಷ್ಮೇಶ್ವರ ಗದಗ ಜಿಲ್ಲೆ ಇವರನ್ನು ದಿ ಕರ್ನಾಟಕ ಸೆಂಟ್ರಲ್ ಕೋ–ಆಪರೇಟಿವ್ ಬ್ಯಾಂಕ್ ನಿ., ಧಾರವಾಡ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 512

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಸಿಒ 83 ಸಿಎನ್‌ಎಸ್ 2008, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೀದರ್ ಜಿಲ್ಲೆ ಹುಮನಾಬಾದ್ ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ. ಹುಮನಾಬಾದ್ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀಮತಿ ಸಂಗೀತಾ ಮಲ್ಲಿಕಾರ್ಜುನ ಪಾಟೀಲ ಕಲ್ಲೂರ ನಿವಾಸಿ, ಹುಮನಾಬಾದ ತಾಲ್ಲೂಕು
2. ಶ್ರೀ ಸಂಜೀವ ರೆಡ್ಡಿ ಮಾಚರೆಡ್ಡಿ ಬೀರಾದಾರ, ಹುಮನಾಬಾದ
3. ಶ್ರೀ ಗೋವೆಂದ್ ಬೋಜು ಚವ್ಹಾಣ್ ಖೇರ್ಡ್ (ಬಿ) ಬಸವಕಲ್ಯಾಣ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 513

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಸಿಒ 82 ಸಿಎನ್‌ಎಸ್ 2008, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಮಲ್ಲಿಕಾರ್ಜುನ್ ಶಿವರಾಜಪ್ಪ ಕುಂಬಾರ, ಗಡವಂತಿ ಅಂಚೆ, ಹುಮನಾಬಾದ್ ತಾಲ್ಲೂಕು ಇವರನ್ನು ಬೀದರ್ ಜಿಲ್ಲೆ ಹುಮನಾಬಾದ್ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಹುಮನಾಬಾದ್ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 514

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಿಓ 87 ಸಿಎಸ್‌ಎಸ್ 2009, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಶಿವಮೊಗ್ಗ ಜಿಲ್ಲೆ ಮತ್ತು ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ. ಶಿವಮೊಗ್ಗ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ಎಂ. ಗಣೇಶ್ ಬಿನ್ ಮರಿಗೌಡ, ಸಂತೆ ಕಡೂರು ಅಂಚೆ, ಶಿವಮೊಗ್ಗ ತಾಲ್ಲೂಕು
2. ಶ್ರೀ ನಾಗರಾಜ ಬಿನ್ ಅಪ್ಪಣ್ಣ, ಆಯನೂರು ಕೋಹಳ್ಳಿ, ಗದ್ದೆ ಮನೆ, ಆಯನೂರು (ಅಂ) ಶಿವಮೊಗ್ಗ ತಾ:
3. ಶ್ರೀಮತಿ ಪದ್ಮಿನಿ ಕೋಂ ಹುಚ್ಚುರಾವ್, ಹೊಸೂರು, ಆಯನೂರು (ಅಂಚೆ) ಶಿವಮೊಗ್ಗ ತಾ:

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 515

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಅಧಿಸೂಚನೆ ಸಂಖ್ಯೆ: ಸಿಓ 90 ಸಿಎಸ್‌ಎಸ್ 2008, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಮಹಾರುದ್ರಪ್ಪ ಬಾಳಪ್ಪ ಖೇಮಜಿ ಸಾ:ಬಡಸ ಕೆ.ಹೆಚ್. ತಾ: ಬೆಳಗಾವಿ ಇವರನ್ನು ಬೆಳಗಾಂ ಜಿಲ್ಲೆ ಮತ್ತು ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಬೆಳಗಾಂ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 516

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಿಓ 103 ಸಿಎಸ್‌ಎಸ್ 2009, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಬಿ.ಟಿ. ಈಶ್ವರಪ್ಪ ಬಿನ್ ತೀರ್ಥಪ್ಪ, ಬನ್ನಿಕೆರೆ ಗ್ರಾಮ, ಕೊಮ್ಮನಾಳ (ಅಂ), ಶಿವಮೊಗ್ಗ ತಾಲ್ಲೂಕು ಇವರನ್ನು ಶಿವಮೊಗ್ಗ ಜಿಲ್ಲೆ ಮತ್ತು ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಶಿವಮೊಗ್ಗ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 517

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಿಒ 104 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ವಿ. ಅಂಜಿನಪ್ಪ ತಂದೆ ಹನುಮಂತಪ್ಪ, ಉಪ್ಪರಹಳ್ಳಿ ಇವರನ್ನು ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಹೊಸಪೇಟೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 518

**ಅಧಿಸೂಚನೆ**

**ಸಂಖ್ಯೆ: ಸಿಒ 106 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಅರಸೀಕೆರೆ ಮತ್ತು ಅರಸೀಕೆರೆ ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ., ಅರಸೀಕೆರೆ ಇವರುಗಳ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಅರಸೀಕೆರೆ ತಾಲ್ಲೂಕು**

ಶ್ರೀ ವೀರಭದ್ರಪ್ಪ ಬಿನ್ ಬಸವೇಗೌಡ, ಮಾ:ಗ್ರಾ.ಪಂ. ಅಧ್ಯಕ್ಷರು, ಹಬ್ಬನಘಟ್ಟ, ಅರಸೀಕೆರೆ ತಾಲ್ಲೂಕು

**ಅರಸೀಕೆರೆ ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ., ಅರಸೀಕೆರೆ**

1. ಶ್ರೀಮತಿ ಹೆಚ್.ಜಿ. ಸುಮಾ ಕೋಂ ಲೋಕೇಶ್, ಚಿಕ್ಕಮ್ಮನಹಳ್ಳಿ ಕುರುವಂಕ (ಪೋ) ಅರಸೀಕೆರೆ ತಾ:
2. ಶ್ರೀ ಜೆ.ಹೆಚ್. ನಿಂಗಪ್ಪ ಬಿನ್ ಹೊನ್ನಪ್ಪ, ಕಾಮಸಮುದ್ರ ಪೋ, ಕಣಕಟ್ಟೆ ಹೋ:ಅರಸೀಕೆರೆ ತಾ:
3. ಶ್ರೀ ಗಂಗರಾಜು ಬಿನ್ ಕರಿಯಾಬೋವಿ, ಲಿಂಗದಹಳ್ಳಿ, ಜಾವಗಲ್ ಹೋ:ಅರಸೀಕೆರೆ ತಾ:

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 519

**ಅಧಿಸೂಚನೆ**

**ಸಂಖ್ಯೆ: ಸಿಒ 107 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹಾಸನ ಜಿಲ್ಲೆ ಬೇಲೂರು ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ. ಬೇಲೂರು ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ಅಭಿಗೌಡ ಬಿನ್ ಮಂಜುನಾಥಗೌಡ, ನಾಗೇನಹಳ್ಳಿ ಗ್ರಾಮ & ಪೋಸ್ಟ್, ಬೇಲೂರು

2. ಶ್ರೀಮತಿ ಶೈಲ ಮೋಹನ್ ಕೋಂ ಮೋಹನ್, ಕೆರಗೋಡು, ಅರೇಹಳ್ಳಿ ಅಂಚೆ,
3. ಶ್ರೀ ನಾಗೇಶ್ ಬಿನ್ ಪುಟ್ಟಯ್ಯ, ಕಳ್ಳೇರಿ ಗ್ರಾಮ ಮತ್ತು ಮಂಡಲಮನೆ ಅಂಚೆ, ಬೇಲೂರು ತಾ:

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ಪಿ.ಆರ್. 520 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಅಧಿಸೂಚನೆ ಸಂಖ್ಯೆ: ಸಿಒ 108 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹಾಸನ ಜಿಲ್ಲೆ ಆಲೂರು ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ. ಆಲೂರು ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ರಂಗೇಗೌಡ ಬಿನ್ ದಾಸೇಗೌಡ, ಹಳೇ ಆಲೂರು, ಆಲೂರು ತಾಲ್ಲೂಕು
2. ಶ್ರೀ ನಿಂಗರಾಜು ಬಿನ್ ಕೆಂಚಯ್ಯ, ಬೆಳಮೆ, ಮಡಬಲು ಅಂಚೆ, ಆಲೂರು ತಾಲ್ಲೂಕು
3. ಶ್ರೀಮತಿ ಮಂಜುಳ ಕೋಂ ಶಿವಪ್ಪ, ಹಳೇ ಆಲೂರು, ಆಲೂರು ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ಪಿ.ಆರ್. 521 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಅಧಿಸೂಚನೆ ಸಂಖ್ಯೆ:, ಸಇ 170 ಎಂಆರ್‌ಇ 2009, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್, 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11(1)(ix) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅರಸೀಕೆರೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ.

| ಕ್ರ.ಸಂ | ಸದಸ್ಯರ ಹೆಸರು |
|---|---|
| 1 | ಶ್ರೀಮತಿ ಚಂದ್ರಮ್ಮ ಕೋಂ. ಪ್ರಭಣ್ಣ,<br>ಬೊಮ್ಮೇನಹಳ್ಳಿ, ಅಗ್ಗುಂದ (ಪೋ)<br>ಕಸಬಾ ಹೋಬಳಿ, ಅರಸೀಕೆರೆ ತಾಲ್ಲೂಕು. |
| 2. | ಶ್ರೀ ಮಲ್ಲಪ್ಪ ಬಿನ್ ದೊಡ್ಡಬಸಪ್ಪ,<br>ಬಂಡೇಕೆರೆ (ಪೋ) ಬಾಣಾವರ ಹೋಬಳಿ,<br>ಅರಸೀಕೆರೆ ತಾಲ್ಲೂಕು |
| 3 | ಶ್ರೀ ಕೆ.ಬಿ. ಶಿವಕುಮಾರ್ ಬಿನ್ ಬೋರಣ್ಣ,<br>ಕಣಕಟ್ಟೆ (ಪೋ), ಕಣಕಟ್ಟೆ ಹೋಬಳಿ,<br>ಅರಸೀಕೆರೆ ತಾಲ್ಲೂಕು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಕೆ. ವಾಸುದೇವ ಮೂರ್ತಿ**
ಪಿ.ಆರ್. 540 ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

**ಅಧಿಸೂಚನೆ ಸಂಖ್ಯೆ: ಸಿಒ 109 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಉತ್ತರ ಕನ್ನಡ ಜಿಲ್ಲೆ ಜೋಯಿಡಾ ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ., ಜೋಯಿಡಾ ಇದರ

ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ಮಾರುತಿ ಕೃಷ್ಣಾ ದೇಸಾಯಿ, ಮು:ಕೆಪಿಸಿ ಕಾಲೋನಿ, ಇ–ಟೈಪ್ 2/1, ಗಣೇಶ ಗುಡಿ, ಜೋಯಿಡಾ ತಾ:
2. ಶ್ರೀಮತಿ ಶೋಭಾ ವಿನಾಯಕ ಬಾಪಟ, ಮು:ಕೆಪಿಸಿ ಕಾಲೋನಿ, ಇ–ಟೈಪ್ 12/1 ಗಣೇಶ ಗುಡಿ, ಜೋಯಿಡಾ ತಾಲ್ಲೂಕು
3. ಶ್ರೀ ರಾಜನ ಕೃಷ್ಣಾ ಕಾಂಬಳೆ, ಮು:ಗಣೇಶ ಗಲ್ಲಿ, ರಾಮನಗರ, ಜೋಯಿಡಾ ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 522

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಿಒ 180 ಸಿಎನ್‌ಎಸ್ 2008, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ , 2009**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ 180 ಸಿಎನ್‌ಎಸ್ 2008 ದಿನಾಂಕ 2.1.2009ರಲ್ಲಿ ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮುಧೋಳ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಮಲ್ಲನಗೌಡ ಸಗರೆಪ್ಪ ಪೊಲೀಸ್ ಪಾಟೀಲ್, ಸಾ:ದಾದನಟ್ಟಿ, ತಾ ಮುಧೋಳ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಸಗರಪ್ಪ ದಳವಾಯಿ, ಬರಗಿ ಗ್ರಾಮ ಮುಧೋಳ ತಾಲ್ಲೂಕು ಇವರನ್ನು ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮುಧೋಳ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 523

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 34 ರಾಶಾಪ್ರ 2009, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್, 2009**

The Karnataka Public Moneys (Recovery of Dues) Act, 1979 (Karnataka Act 16 of 1980) ಇದರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1979**

**ಪ್ರಕರಣಗಳ ಅನುಕ್ರಮಣಿಕೆ**

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ:**

**ಪ್ರಕರಣಗಳು:**

4. ಉಳಿಸುವಿಕೆಗಳು
5. ನಿಯಮಗಳನ್ನು ರಚಿಸಲು ಅಧಿಕಾರ
6. ನಿರಸನ ಮತ್ತು ಸಿಂಧುತ್ವ, ಇತ್ಯಾದಿ

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

**ಅಧಿನಿಯಮ 1980ರ 16.–** ವಾಣಿಜ್ಯ ಬ್ಯಾಂಕುಗಳ ಸಾಲ ನೀಡಿಕೆ ಕಾರ್ಯಕ್ರಮಗಳಲ್ಲಿ, ಅದರಲ್ಲೂ ವಿಶೇಷವಾಗಿ ಸರ್ಕಾರದ ಉದ್ದೇಶಗಳೊಂದಿಗೆ ನಿಕಟವಾಗಿ ಪರಸ್ಪರ ಸಂಬಂಧ ಹೊಂದಿರುವ ಸಾಲ ನೀಡಿಕೆ ಕಾರ್ಯಕ್ರಮಗಳಲ್ಲಿ ವಾಣಿಜ್ಯ ಬ್ಯಾಂಕುಗಳಿಗೆ ನೆರವು ನೀಡಲು ಕರ್ನಾಟಕ ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1976ನ್ನು ಅಧಿನಿಯಮಿತಿಗೊಳಿಸಲಾಗಿತ್ತು ಮತ್ತು ಸರ್ಕಾರವು "ರಾಜ್ಯ ಪುರಸ್ಕೃತ ಕಾರ್ಯಯೋಜನೆ"ಗಳೆಂದು ಅಧಿಸೂಚಿಸಿದ ಕಾರ್ಯಯೋಜನೆಗಳಿಗೆ ವಾಣಿಜ್ಯ ಬ್ಯಾಂಕುಗಳು ಸಾಲ ನೀಡಿರುವಷ್ಟರ ಮಟ್ಟಿಗೆ ಆ ಸಾಲಗಳನ್ನು ಭೂಕಂದಾಯದ ಬಾಕಿಗಳಂತೆ ವಸೂಲಿ ಮಾಡಲು ಆ ಅಧಿನಿಯಮದಲ್ಲಿ ಉಪಬಂಧ ಕಲ್ಪಿಸಲಾಗಿತ್ತು. ಈ ಅಧಿನಿಯಮವನ್ನು ಜಾರಿಗೊಳಿಸುವಾಗ "ಸಾಮಾಜಿಕವಾಗಿ ಅಪೇಕ್ಷಣೀಯವಾದ ಕಾರ್ಯಯೋಜನೆ"ಗಳೆಂದು ಸರ್ಕಾರವು ಪರಿಗಣಿಸಿರುವ ಇತರ ಅನೇಕ ಯೋಜನೆಗಳಿವೆಯೆಂಬುದು ತಿಳಿದುಬಂದಿದೆ. ಅವುಗಳಲ್ಲಿ, ರಾಜ್ಯ ಸರ್ಕಾರದಿಂದ ಯಾವುದೇ ರೀತಿಯ ಹಣಕಾಸಿನ ಪಾಲ್ಗೊಳ್ಳುವಿಕೆ ಇಲ್ಲದಿರಬಹುದು. ಆದರೂ, ಅವು ಸರ್ಕಾರದ ಉದ್ದೇಶಗಳ ಈಡೇರಿಕೆಗೆ ಅತ್ಯಾವಶ್ಯಕ ಮತ್ತು ಈ ಕಾರ್ಯಕ್ರಮಗಳಿಗೆ ಬೆಂಬಲ ನೀಡಲು ವಾಣಿಜ್ಯ ಬ್ಯಾಂಕುಗಳನ್ನು ಪ್ರೋತ್ಸಾಹಿಸಬೇಕಾಗಿದೆ. ಈ ಬಗ್ಗೆ ಅಂಥ ಒಂದು ಸಮನ್ವಯವನ್ನು ಸಾಧಿಸುವ ದೃಷ್ಟಿಯಿಂದ, ಸಾಮಾಜಿಕವಾಗಿ ಅಪೇಕ್ಷಣೀಯವಾದ ಕಾರ್ಯಯೋಜನೆಗಳನ್ನು, ಅವುಗಳ ಪರಿಭಾಷೆಯನ್ನು ಮತ್ತು ಒಳಾಂಶಗಳನ್ನು ಸೇರಿಸಿ ಈ ಅಧಿನಿಯಮಕ್ಕೆ ತಿದ್ದುಪಡಿ ಮಾಡುವುದು ಅವಶ್ಯಕವಾಗಿದೆ. ಈ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ತಿದ್ದುಪಡಿ ವಿಧೇಯಕವನ್ನು ಕಾನೂನು ಇಲಾಖೆಗೆ ಕಳುಹಿಸಿದಾಗ, ಅದು ಕರ್ನಾಟಕ ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1976ನ್ನು ಅಧಿನಿಯಮಿತಿಗೊಳಿಸುವಾಗ, ಭಾರತ ಸಂವಿಧಾನದ ಏಳನೇ ಅನುಸೂಚಿಯ IIIನೇ ಪಟ್ಟಿಯ 13ನೇ ನಮೂದಿನ ಅಡಿಯಲ್ಲಿ ಬರುವ ಅಸ್ತಿತ್ವದಲ್ಲಿರುವ ಕೇಂದ್ರ ಕಾನೂನಿಗೆ ಸದರಿ ಅಧಿನಿಯಮದ ಕೆಲವು ಉಪಬಂಧಗಳು ವಿರುದ್ಧವಾಗಿದ್ದರೂ, ಭಾರತದ ರಾಷ್ಟ್ರಪತಿಯವರ ಸಮ್ಮತಿ ಪಡೆದಿಲ್ಲವೆಂದು ಮತ್ತು ಆ ಆಧಾರದ ಮೇಲೆ ಈ ಅಧಿನಿಯಮದ ಸಿಂಧುತ್ವವನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿತ್ತೆಂದು ಅಭಿಪ್ರಾಯಪಟ್ಟಿದೆ. ಈ ನ್ಯೂನ್ಯತೆಯನ್ನು ಸರಿಪಡಿಸಲು ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1976ರ ಅಡಿಯಲ್ಲಿ ಕೈಗೊಂಡ ಕ್ರಮವನ್ನು ಸಿಂಧುಗೊಳಿಸುವ ಉಪಬಂಧದ ಸಹಿತ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹೊಸ ಅಧಿನಿಯಮವನ್ನು ಘೋಷಿಸುವುದು ಅವಶ್ಯಕವಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ– IV–2ಎ ದಿನಾಂಕ 16ನೇ ಮೇ, 1979 ರಲ್ಲಿ ಪುಟ 8–9 ರಲ್ಲಿ ಸಂಖ್ಯೆ. 471 ರಲ್ಲಿ ಪ್ರಕಟಿಸಲಾಗಿದೆ.)

**II**

**ತಿದ್ದುಪಡಿ ಮಾಡುವ ಅಧಿನಿಯಮ 1981ರ 48.–** ವಾಣಿಜ್ಯ ಬ್ಯಾಂಕುಗಳ ಸಾಲ ನೀಡಿಕೆ ಕಾರ್ಯಕ್ರಮಗಳಲ್ಲಿ, ಅದರಲ್ಲೂ ವಿಶೇಷವಾಗಿ ಸರ್ಕಾರದ ಉದ್ದೇಶಗಳೊಂದಿಗೆ ನಿಕಟವಾಗಿ ಪರಸ್ಪರ ಸಂಬಂಧ ಹೊಂದಿರುವ ಸಾಲ ನೀಡಿಕೆ ಕಾರ್ಯಕ್ರಮಗಳಲ್ಲಿ ವಾಣಿಜ್ಯ ಬ್ಯಾಂಕುಗಳಿಗೆ ನೆರವು ನೀಡಲು, ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1979ನ್ನು ಅಧಿನಿಯಮಿತಿಗೊಳಿಸಲಾಗಿತ್ತು.

ಭಾರತ ಸರ್ಕಾರದ ಗೃಹ ವ್ಯವಹಾರಗಳ ಮಂತ್ರಾಲಯವು ಸದರಿ ಶಾಸನಕ್ಕೆ ರಾಷ್ಟ್ರಪತಿಯವರ ಸಮ್ಮತಿ ದೊರೆತಿರುವುದನ್ನು ತಿಳಿಸುವಾಗ, 'ಬ್ಯಾಂಕಿಂಗ್ ಕಂಪನಿ'ಯ ಪರಿಭಾಷೆಯನ್ನು ಈ ವಿಧೇಯಕದಲ್ಲಿ ಈಗ ಪ್ರಸ್ತಾಪಿಸಿರುವಂತೆ ತಿದ್ದುಪಡಿ ಮಾಡಬಹುದೆಂದು ಸೂಚಿಸಿತ್ತು.

ಆದ್ದರಿಂದ ಈ ವಿಧೇಯಕ,

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ – IV - 2ಎ ದಿನಾಂಕ 3ನೇ ಫೆಬ್ರವರಿ, 1981ರಲ್ಲಿ ಪುಟ 4 ರಲ್ಲಿ ಸಂಖ್ಯೆ. 103 ರಲ್ಲಿ ಪ್ರಕಟಿಸಲಾಗಿದೆ.)

**III**

**ತಿದ್ದುಪಡಿ ಮಾಡುವ ಅಧಿನಿಯಮ 1985ರ 37.–** ಈ ವಿಧೇಯಕವು, ಈ ಮುಂದಿನ ಉದ್ದೇಶಗಳಿಗಾಗಿ ಕರ್ನಾಟಕ ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1979ನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸುತ್ತದೆ.

**ಖಂಡ 3.–** ಇನ್ನು ಮುಂದೆ ಬಡ್ಡಿಯನ್ನು ಯಾವ ದರದಲ್ಲಿ ವಸೂಲಿ ಮಾಡಬೇಕೆಂಬುದನ್ನು ನಿರ್ದಿಷ್ಟಪಡಿಸುವುದು.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ – IV– 2ಎ ದಿನಾಂಕ 5ನೇ ಆಗಸ್ಟ್, 1985 ರಲ್ಲಿ ಪುಟ 2 ರಲ್ಲಿ ಸಂಖ್ಯೆ. 426 ರಲ್ಲಿ ಪ್ರಕಟಿಸಲಾಗಿದೆ.)

**ಕರ್ನಾಟಕ ಅಧಿನಿಯಮ ಸಂಖ್ಯೆ 1980ರ 16**

(1980ರ ಏಪ್ರಿಲ್ ಇಪ್ಪತ್ತನಾಲ್ಕನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟಿತವಾಗಿದೆ)

**ಕರ್ನಾಟಕ ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1979**

(1980ರ ಏಪ್ರಿಲ್ ಹದಿನೆಂಟನೇ ದಿನಾಂಕದಂದು ರಾಷ್ಟ್ರಪತಿಯವರ ಸಮ್ಮತಿ ಪಡೆದಿದೆ)

(1981ರ ಅಧಿನಿಯಮ 48ರ ಮತ್ತು 1985ರ 37ರ ಮೂಲಕ ತಿದ್ದುಪಡಿಯಾದಂತೆ)

ಕೆಲವು ವರ್ಗಗಳ ಬಾಕಿಗಳನ್ನು ಶೀಘ್ರವಾಗಿ ವಸೂಲು ಮಾಡಲು ಉಪಬಂಧ ಕಲ್ಪಿಸುವ ಅಧಿನಿಯಮ.

ಕೆಲವು ವರ್ಗಗಳ ಬಾಕಿಗಳನ್ನು ಶೀಘ್ರವಾಗಿ ವಸೂಲು ಮಾಡಲು ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಮೂವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಚಿಕ್ಕ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1979 ಎಂದು ಕರೆಯತಕ್ಕದ್ದು.

(2) 6ನೇ ಪ್ರಕರಣವು ಕೂಡಲೇ ಜಾರಿಗೆ ಬರತಕ್ಕದ್ದು. ಇತರ ಪ್ರಕರಣಗಳು, 1976ರ ಜೂನ್ ಹದಿನೈದನೇ ದಿನಾಂಕದಂದು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

[1][(ಎ)] "ಬ್ಯಾಂಕಿಂಗ್ ಕಂಪನಿ" ಎಂದರೆ,–

(i) ಬ್ಯಾಂಕಿಂಗ್ ವಿನಿಯಮನ ಅಧಿನಿಯಮ, 1949 (ಕೇಂದ್ರ ಅಧಿನಿಯಮ 1949ರ 10) ರಲ್ಲಿ ಪರಿಭಾಷಿಸಿರುವ ಬ್ಯಾಂಕಿಂಗ್ ಕಂಪನಿ;

(ii) ಭಾರತೀಯ ಸ್ಟೇಟ್ ಬ್ಯಾಂಕ್ ಅಧಿನಿಯಮ, 1955 (ಕೇಂದ್ರ ಅಧಿನಿಯಮ 1955ರ 23)ರ ಮೇರೆಗೆ ಸ್ಥಾಪಿಸಲಾದ ಭಾರತೀಯ ಸ್ಟೇಟ್ ಬ್ಯಾಂಕ್;

(iii) ಭಾರತೀಯ ಸ್ಟೇಟ್ ಬ್ಯಾಂಕ್ (ಅಧೀನ ಬ್ಯಾಂಕುಗಳು) ಅಧಿನಿಯಮ, 1959 (ಕೇಂದ್ರ ಅಧಿನಿಯಮ, 1959ರ 38) ರಲ್ಲಿ ಪರಿಭಾಷಿಸಿರುವ ಸಹಾಯಕ ಬ್ಯಾಂಕ್‌ಗಳು;

(iv) ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1970 (ಕೇಂದ್ರ ಅಧಿನಿಯಮ 1970ರ 5)ರ ಮೇರೆಗೆ ಸ್ಥಾಪಿಸಲಾದ ಸಂವಾದಿ ಹೊಸ ಬ್ಯಾಂಕ್;

(v) ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಅಧಿನಿಯಮ, 1976 (ಕೇಂದ್ರ ಅಧಿನಿಯಮ 1976ರ 21)ರ ಮೇರೆಗೆ ಸ್ಥಾಪಿಸಲಾದ ಪ್ರಾದೇಶಿಕ ಗ್ರಾಮೀಣ ಬ್ಯಾಂಕ್;

(vi) ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1980 (ಕೇಂದ್ರ ಅಧಿನಿಯಮ 1980ರ 40)ರ ಮೇರೆಗೆ ಸ್ಥಾಪಿಸಲಾದ ಸಂವಾದಿ ಹೊಸ ಬ್ಯಾಂಕ್;

(vii) ಕೃಷಿ ಪುನರ್ ಹಣಕಾಸು ಮತ್ತು ಅಭಿವೃದ್ಧಿ ನಿಗಮ ಅಧಿನಿಯಮ, 1963 (ಕೇಂದ್ರ ಅಧಿನಿಯಮ 1963ರ 10)ರ ಮೇರೆಗೆ ಸ್ಥಾಪಿಸಲಾದ ಕೃಷಿ ಪುನರ್ ಹಣಕಾಸು ಮತ್ತು ಅಭಿವೃದ್ಧಿ ನಿಗಮ; ಮತ್ತು

1. ಅಧಿನಿಯಮ 1981ರ 48ರ ಮೂಲಕ 15.6.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(viii) ಭಾರತೀಯ ಕಂಪನಿಗಳ ಅಧಿನಿಯಮ, 1956 (ಕೇಂದ್ರ ಅಧಿನಿಯಮ 1956ರ 1)ರ ಮೇರೆಗೆ ಕೃಷಿ ಹಣಕಾಸು ನಿಗಮ ನಿಯಮಿತ ಎಂದು ನಿಗಮಿತಗೊಳಿಸಿದ ಕಂಪನಿ

– ಎಂದು ಅರ್ಥ.

(ಬಿ) "ನಿಗಮ" ಎಂದರೆ ರಾಜ್ಯ ಹಣಕಾಸು ನಿಗಮ ಅಧಿನಿಯಮ, 1951ರ ಮೇರೆಗೆ ಸ್ಥಾಪಿಸಲಾದ ಕರ್ನಾಟಕ ರಾಜ್ಯ ಹಣಕಾಸು ನಿಗಮ ಎಂದು ಅರ್ಥ ಮತ್ತು ಅದು ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಒಡೆತನದಲ್ಲಿ ಇರುವ ಅಥವಾ ಅದರ ನಿಯಂತ್ರಣದಲ್ಲಿರುವ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಯಾವುದೇ ನಿಗಮವನ್ನು ಒಳಗೊಳ್ಳುತ್ತದೆ.

(ಸಿ) "ಹಣಕಾಸು ನೆರವು" ಎಂದರೆ,–

(i) ಯಾವುದೇ ಕೈಗಾರಿಕಾ ಉದ್ಯಮವನ್ನು ಸ್ಥಾಪಿಸುವುದಕ್ಕಾಗಿ, ವಿಸ್ತರಿಸುವುದಕ್ಕಾಗಿ, ಆಧುನೀಕರಣಗೊಳಿಸುವುದಕ್ಕಾಗಿ, ನವೀಕರಣ ಮಾಡುವುದಕ್ಕಾಗಿ ಅಥವಾ ನಡೆಸುವುದಕ್ಕಾಗಿ; ಅಥವಾ

(ii) ವೃತ್ತಿ ಶಿಕ್ಷಣ ತರಬೇತಿಯ ಉದ್ದೇಶಗಳಿಗಾಗಿ; ಅಥವಾ

(iii) ಕೃಷಿ, ತೋಟಗಾರಿಕೆ, ಪಶು ಸಂಗೋಪನೆ ಅಥವಾ ಕೃಷಿ ಉದ್ಯಮದ ಅಭಿವೃದ್ಧಿಗಾಗಿ; ಅಥವಾ

(iv) ಇತರ ಯಾವುದೇ ರೀತಿಯ ಯೋಜಿತ ಅಭಿವೃದ್ಧಿಯ ಉದ್ದೇಶಗಳಿಗಾಗಿ; ಅಥವಾ

(v) ಸಂಕಷ್ಟ ಪರಿಸ್ಥಿತಿಯ ಪರಿಹಾರಕ್ಕಾಗಿ

– ನೀಡುವ ಯಾವುದೇ ಹಣಕಾಸಿನ ನೆರವು ಎಂದು ಅರ್ಥ.

(ಡಿ) "ಸರ್ಕಾರಿ ಕಂಪನಿ" ಎಂದರೆ ಕಂಪನಿಗಳ ಅಧಿನಿಯಮ, 1956ರ 617ನೇ ಪ್ರಕರಣದಲ್ಲಿ ಪರಿಭಾಷಿಸಿದ ಸರ್ಕಾರಿ ಕಂಪನಿ ಎಂದು ಅರ್ಥ;

(ಇ) "ಕೈಗಾರಿಕಾ ಸಂಸ್ಥೆ" ಎಂಬುದು ಕಾಲಕಾಲಕ್ಕೆ ತಿದ್ದುಪಡಿಯಾದ ರಾಜ್ಯ ಹಣಕಾಸು ನಿಗಮ ಅಧಿನಿಯಮ, 1951 ರಲ್ಲಿ ಅದಕ್ಕೆ ಕೊಟ್ಟಿರುವ ಅರ್ಥವನ್ನೇ ಹೊಂದಿರುತ್ತದೆ.

(ಎಫ್) "ಕೈಗಾರಿಕಾ ಉದ್ಯಮ" ಎಂಬುದು ಸರಕುಗಳ ತಯಾರಿಕೆ, ಸಂರಕ್ಷಣೆ, ದಾಸ್ತಾನು ಅಥವಾ ಸಂಸ್ಕರಣೆಗೆ ಸಂಬಂಧಿಸಿದ ಯಾವುದೇ ಉದ್ಯಮ ಅಥವಾ ಗಣಿ ಉದ್ಯಮ ಅಥವಾ ಹೋಟೆಲ್ ಉದ್ಯಮ ಅಥವಾ ಪ್ರಯಾಣಿಕರ ಅಥವಾ ಸರಕುಗಳ ಸಾಗಣೆ ಅಥವಾ ವಿದ್ಯುಚ್ಛಕ್ತಿಯ ಅಥವಾ ಇತರ ಯಾವುದೇ ರೀತಿಯ ಶಕ್ತಿಯ ಉತ್ಪಾದನೆ ಅಥವಾ ವಿತರಣೆ ಅಥವಾ ಅದಕ್ಕೆ ಹೊಂದಿಕೊಂಡಿರುವ ಯಾವುದೇ ಪ್ರದೇಶವನ್ನು ಕೈಗಾರಿಕಾ ಎಸ್ಟೇಟ್ ಆಗಿ ಅಭಿವೃದ್ಧಿಪಡಿಸುವುದು – ಇವುಗಳನ್ನು ಒಳಗೊಳ್ಳುತ್ತದೆ;

**ವಿವರಣೆ.–** "ಸರಕುಗಳ ಸಂಸ್ಕರಣ" ಎಂಬ ಪದಾವಳಿಯು, ಯಾವುದೇ ಪದಾರ್ಥವನ್ನು ಶಾರೀರಿಕ ಶ್ರಮದ, ರಾಸಾಯನಿಕ, ವಿದ್ಯುತ್ ಅಥವಾ ಯಾವುದೇ ಇತರ ಅಂಥದೇ ಕಾರ್ಯಾಚರಣೆಗೆ ಒಳಪಡಿಸುವ ಮೂಲಕ ವಸ್ತುವನ್ನು ಉತ್ಪಾದಿಸುವುದು, ತಯಾರಿಸುವುದು ಅಥವಾ ಮಾಡುವ ಯಾವುದೇ ಸಂಸ್ಕರಣ ಕ್ರಿಯೆಯನ್ನು ಒಳಗೊಳ್ಳುತ್ತದೆ.

(ಜಿ) "ವ್ಯಕ್ತಿ" ಎಂಬುದು ಕಾನೂನುಸಮ್ಮತ ಪ್ರತಿನಿಧಿಯನ್ನು ಅಥವಾ ಹಸ್ತಾಂತರ ಪಡೆದವನನ್ನು ಒಳಗೊಳ್ಳುತ್ತದೆ;

(ಹೆಚ್) "ರಾಜ್ಯ ಪುರಸ್ಕೃತ ಕಾರ್ಯಯೋಜನೆ" ಎಂದರೆ ರಾಜ್ಯ ಸರ್ಕಾರದಿಂದ ಹಣಕಾಸಿನ ನೆರವನ್ನು ಪಡೆದು ಪುರಸ್ಕೃತವಾಗಿರುವ, ಯಾವ ಕಾರ್ಯಯೋಜನೆಯ ಮೇರೆಗೆ ರಾಜ್ಯ ಸರ್ಕಾರವು,–

(i) ಸಾಲಗಳನ್ನು, ಮುಂಗಡಗಳನ್ನು ಅಥವಾ ಅನುದಾನಗಳನ್ನು ವಿತರಿಸುವ ಉದ್ದೇಶಗಳಿಗಾಗಿ ಅಥವಾ ಸಾಲದ ಮೇಲೆ ಅಥವಾ ಕಂತು ಖರೀದಿಯ ಮೇಲೆ ಸರಕುಗಳನ್ನು ಮಾರಾಟ ಮಾಡುವ ಉದ್ದೇಶಗಳಿಗಾಗಿ ಬ್ಯಾಂಕಿಂಗ್ ಕಂಪನಿಗೆ ಅಥವಾ ಸರ್ಕಾರಿ ಕಂಪನಿಗೆ ಹಣವನ್ನು ಒದಗಿಸುವುದೋ;

(ii) ಸಾಲವನ್ನು, ಮುಂಗಡವನ್ನು ಅಥವಾ ಅನುದಾನವನ್ನು ಮರುಸಂದಾಯ ಮಾಡಲು ಅಥವಾ ಸಾಲದ ಮೇಲೆ ಅಥವಾ ಕಂತು ಖರೀದಿಯ ಮೇಲೆ ಮಾರಾಟ ಮಾಡಿದ ಸರಕುಗಳ ಬೆಲೆಯನ್ನು ಸಂದಾಯ ಮಾಡಲು ಖಾತರಿ ನೀಡುವುದೋ ಅಥವಾ ಖಾತರಿ ನೀಡಲು ಒಪ್ಪಿಕೊಳ್ಳುವುದೋ

– ಆ ಕಾರ್ಯಯೋಜನೆ ಎಂದು ಅರ್ಥ;

(ಐ) "ಸಾಮಾಜಿಕವಾಗಿ ಅಪೇಕ್ಷಣೀಯವಾದ ಕಾರ್ಯಯೋಜನೆ" ಎಂದರೆ ರಾಜ್ಯ ಸರ್ಕಾರವು ಸಾಮಾಜಿಕವಾಗಿ ಅಪೇಕ್ಷಣೀಯವಾದ ಕಾರ್ಯಯೋಜನೆಯೆಂದು ಅಧಿಸೂಚಿಸಿದ ಕಾರ್ಯಯೋಜನೆಯ ಮೇರೆಗೆ ಸಾಲದ ರೂಪದಲ್ಲಿ ಯಾರೇ ವ್ಯಕ್ತಿಗೆ ಬ್ಯಾಂಕಿಂಗ್ ಕಂಪನಿಯು ಹಣವನ್ನು ನೀಡುವುದೋ ಆ ಕಾರ್ಯಯೋಜನೆ ಎಂದು ಅರ್ಥ.

**3. ಭೂ ಕಂದಾಯದ ಬಾಕಿಗಳಂತೆ ಕೆಲವು ಬಾಕಿಗಳ ವಸೂಲಿ.–** (1) ಯಾರೇ ವ್ಯಕ್ತಿಯು,–

(ಎ) ಹಣಕಾಸಿನ ನೆರವಿನ ರೂಪದಲ್ಲಿ ರಾಜ್ಯ ಸರ್ಕಾರವು ಅಥವಾ ನಿಗಮವು ಅವನಿಗೆ ನೀಡಿದ ಸಾಲಕ್ಕೆ, ಮುಂಗಡಕ್ಕೆ ಅಥವಾ ಅನುದಾನಕ್ಕೆ ಸಂಬಂಧಿಸಿದ ಅಥವಾ ಅವನಿಗೆ ಮಾರಾಟ ಮಾಡಿದ ಸರಕುಗಳಿಗೆ ಸಂಬಂಧಿಸಿದ ಸಾಲಕ್ಕೆ ಅಥವಾ ಸರಕುಗಳ ಕಂತು ಖರೀದಿಗೆ ಸಂಬಂಧಿಸಿದ ಯಾವುದೇ ಒಪ್ಪಂದಕ್ಕೆ; ಅಥವಾ

(ಬಿ) ರಾಜ್ಯ ಪುರಸ್ಕೃತ ಕಾರ್ಯಯೋಜನೆಯ ಮೇರೆಗೆ, ಬ್ಯಾಂಕಿಂಗ್ ಕಂಪನಿಯು ಅಥವಾ ಸಂದರ್ಭಾನುಸಾರ, ಸರ್ಕಾರಿ ಕಂಪನಿಯು ಅವನಿಗೆ ನೀಡಿದ ಸಾಲಕ್ಕೆ, ಮುಂಗಡಕ್ಕೆ ಅಥವಾ ಅನುದಾನಕ್ಕೆ ಸಂಬಂಧಿಸಿದ ಅಥವಾ ಅವನಿಗೆ ಮಾರಾಟ ಮಾಡಿದ ಸರಕುಗಳಿಗೆ ಸಂಬಂಧಿಸಿದ ಸಾಲಕ್ಕೆ ಅಥವಾ ಸರಕುಗಳ ಕಂತು ಖರೀದಿಗೆ ಸಂಬಂಧಿಸಿದ ಯಾವುದೇ ಒಪ್ಪಂದಕ್ಕೆ; ಅಥವಾ

(ಸಿ) ಯಾವುದೇ ಕೈಗಾರಿಕಾ ಸಂಸ್ಥೆಯು ಎತ್ತಿದ ಸಾಲಕ್ಕೆ ಸಂಬಂಧಪಟ್ಟಂತೆ ರಾಜ್ಯ ಸರ್ಕಾರವು ಅಥವಾ ನಿಗಮವು ನೀಡಿದ ಖಾತರಿಗೆ ಸಂಬಂಧಿಸಿದ ಯಾವುದೇ ಒಪ್ಪಂದಕ್ಕೆ; ಅಥವಾ

(ಡಿ) ಈ ಮೇರೆಗೆ ರಾಜ್ಯ ಸರ್ಕಾರಕ್ಕೆ ಸಂದಾಯವಾಗಬೇಕಾದ ಯಾವುದೇ ಹಣವನ್ನು ಭೂ ಕಂದಾಯದ ಬಾಕಿಗಳಂತೆ ವಸೂಲಿ ಮಾಡಲು ಅವಕಾಶ ಕಲ್ಪಿಸುವ ಯಾವುದೇ ಒಪ್ಪಂದಕ್ಕೆ

– ಪಕ್ಷಕಾರನಾಗಿರುವಲ್ಲಿ ಮತ್ತು ಅಂಥ ವ್ಯಕ್ತಿಯು,–

(ಎ) ಸಾಲವನ್ನು ಅಥವಾ ಮುಂಗಡವನ್ನು ಅಥವಾ ಅದರ ಯಾವುದೇ ಕಂತನ್ನು ಸಂದಾಯ ಮಾಡಲು ತಪ್ಪಿದಲ್ಲಿ; ಅಥವಾ

(ಬಿ) ಅನುದಾನವನ್ನು ಅಥವಾ ಅದರ ಯಾವುದೇ ಭಾಗವನ್ನು ಮರುಪಾವತಿ ಮಾಡಲು ಅನುದಾನದ ಷರತ್ತುಗಳ ಮೇರೆಗೆ ಹೊಣೆಗಾರನಾಗಿದ್ದು, ಅಂಥ ಅನುದಾನವನ್ನು ಅಥವಾ ಅದರ ಭಾಗವನ್ನು ಅಥವಾ ಅದರ ಯಾವುದೇ ಕಂತನ್ನು ಮರುಪಾವತಿ ಮಾಡಲು ತಪ್ಪಿದಲ್ಲಿ; ಅಥವಾ

(ಸಿ) ಒಪ್ಪಂದದ ನಿಬಂಧನೆಗಳನ್ನು ಪಾಲಿಸಲು ಅನ್ಯಥಾ ತಪ್ಪಿದಲ್ಲಿ, ಆಗ,–

(i) ರಾಜ್ಯ ಸರ್ಕಾರದ ಸಂದರ್ಭದಲ್ಲಿ, ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ಅಧಿಸೂಚನೆಯ ಮೂಲಕ ಅಧಿಕೃತಗೊಳಿಸಬಹುದಾದ ಅಂಥ ಅಧಿಕಾರಿಯು;

(ii) ನಿಗಮದ ಅಥವಾ ಸರ್ಕಾರಿ ಕಂಪನಿಯ ಸಂದರ್ಭದಲ್ಲಿ, ಅದರ ವ್ಯವಸ್ಥಾಪಕ ನಿರ್ದೇಶಕನು; ಮತ್ತು

(iii) ಬ್ಯಾಂಕಿಂಗ್ ಕಂಪನಿಯ ಸಂದರ್ಭದಲ್ಲಿ, ಯಾವುದೇ ಹೆಸರಿನಿಂದ ಕರೆಯಲಾಗುವ ಅದರ ಸ್ಥಳೀಯ ಏಜೆಂಟನು

– ಅಂಥ ವ್ಯಕ್ತಿಗಳಿಂದ ಬರಬೇಕಾಗಿರುವ ಮೊತ್ತವನ್ನು ನಮೂದಿಸಿರುವ ಮತ್ತು ವ್ಯವಹರಣೆಗಳ ವೆಚ್ಚ ಮತ್ತು ವಸೂಲಿಯ ದಿನಾಂಕದವರೆವಿಗೂ, [1][ಭಾರತ ರಿಸರ್ವ್ ಬ್ಯಾಂಕ್ ಮತ್ತು ಇತರ ಸರ್ಕಾರಿ ಹಣಕಾಸು ಅಥವಾ ಪುನರ್ ಹಣಕಾಸು ಸಂಸ್ಥೆಗಳು ಕಾಲಕಾಲಕ್ಕೆ ಗೊತ್ತುಪಡಿಸಿದ ಪರಿಮಿತಿಯೊಳಗೆ ಒಪ್ಪಿಕೊಂಡ ದರದಲ್ಲಿ][1] ಮುಂದಿನ ಬಡ್ಡಿಯನ್ನು ಒಳಗೊಂಡಂತೆ ಅಂಥ ಮೊಬಲಗನ್ನು ಭೂ ಕಂದಾಯದ ಬಾಕಿಯಾಗಿದ್ದರೆ ಹೇಗೋ ಹಾಗೆ ವಸೂಲಿ ಮಾಡಬೇಕೆಂದು ಕೋರುವ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿಯವರಿಗೆ ಕಳುಹಿಸಬಹುದು. ಜಿಲ್ಲಾಧಿಕಾರಿಯವರಿಗೆ ಕಳುಹಿಸಿದ ಪ್ರಮಾಣ ಪತ್ರವನ್ನು ಯಾವುದೇ ಸಮಯದಲ್ಲಿ ಹಿಂತೆಗೆದುಕೊಳ್ಳಬಹುದು.

1. ಅಧಿನಿಯಮ 1985ರ 37ರ ಮೂಲಕ 21.10.1985 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಜಿಲ್ಲಾಧಿಕಾರಿಯವರು ಪ್ರಮಾಣ ಪತ್ರವನ್ನು ಸ್ವೀಕರಿಸಿದ ಮೇಲೆ, ಅದರಲ್ಲಿ ಹೇಳಿರುವ ಮೊಬಲಗನ್ನು ಭೂ ಕಂದಾಯದ ಬಾಕಿಯಂತೆ ವಸೂಲು ಮಾಡಲು ಕ್ರಮ ಕೈಗೊಳ್ಳತಕ್ಕದ್ದು.

(3) ಬ್ಯಾಂಕಿಂಗ್ ಕಂಪನಿಯು ಸಲ್ಲಿಸಿದ ಅರ್ಜಿಯ ಮೇಲೆ ಮತ್ತು ಸಾಮಾಜಿಕವಾಗಿ ಅಪೇಕ್ಷಣೀಯವಾದ ಕಾರ್ಯಯೋಜನೆಯ ಮೇರೆಗೆ ಯಾರೇ ವ್ಯಕ್ತಿಗೆ ನೀಡಿದ ಸಾಲಕ್ಕೆ ಸಂಬಂಧಪಟ್ಟಂತೆ ಆ ಯಾರೇ ವ್ಯಕ್ತಿಯಿಂದ ಅದಕ್ಕೆ ಬರಬೇಕಾದ ಯಾವುದೇ ಮೊತ್ತಕ್ಕೆ ಸಂಬಂಧಪಟ್ಟಂತೆ ಲೆಕ್ಕಪತ್ರಗಳ ವಿವರ ಪತ್ರವನ್ನು ಅದು ಒದಗಿಸಿದ ಮೇಲೆ, ನಿಯಮಿಸಿದ ಅಧಿಕಾರಿಯು, ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ ಮತ್ತು ಅಂಥ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ತರುವಾಯ, ಬಾಕಿ ಇರುವ ಮೊತ್ತವನ್ನು ನಿರ್ದಿಷ್ಟಪಡಿಸಿ ಪ್ರಮಾಣ ಪತ್ರವನ್ನು ನೀಡಬಹುದು.

(4) ನಿಯಮಿಸಿದ ಅಧಿಕಾರಿಯು ಹಾಗೆ ನೀಡಿದ ಪ್ರಮಾಣ ಪತ್ರವು ಅಂತಿಮವಾದುದಾಗಿರತಕ್ಕದ್ದು ಮತ್ತು ಬ್ಯಾಂಕಿಂಗ್ ಕಂಪನಿಯು ಅದನ್ನು ಜಿಲ್ಲಾಧಿಕಾರಿಯವರಿಗೆ ಕಳುಹಿಸಬಹುದು. ಬಾಕಿಯಿದೆ ಎಂದು ಅದರಲ್ಲಿ ಹೇಳಿದ ಮೊತ್ತವು ಮತ್ತು ವಸೂಲಿಯ ದಿನಾಂಕದವರೆಗೆ ಅದರ ಮೇಲಿನ, [1][ಭಾರತದ ರಿಸರ್ವ್ ಬ್ಯಾಂಕು ಮತ್ತು ಇತರ ಸರ್ಕಾರಿ ಹಣಕಾಸು ಅಥವಾ ಪುನರ್ ಹಣಕಾಸು ಸಂಸ್ಥೆಗಳು ಕಾಲಕಾಲಕ್ಕೆ ಗೊತ್ತುಪಡಿಸಿದ ಪರಿಮಿತಿಯೊಳಗೆ ಒಪ್ಪಿಕೊಂಡ ದರದಲ್ಲಿ][1] ಬಡ್ಡಿಯು ವ್ಯವಹರಣೆಗಳ ವೆಚ್ಚದೊಂದಿಗೆ ಭೂಕಂದಾಯದ ಬಾಕಿಯಂತೆ ವಸೂಲಿ ಮಾಡಬಹುದಾದುದಾಗಿರತಕ್ಕದ್ದು. ಜಿಲ್ಲಾಧಿಕಾರಿಯವರಿಗೆ ಕಳುಹಿಸಿದ ಪ್ರಮಾಣ ಪತ್ರವನ್ನು ಯಾವುದೇ ಸಮಯದಲ್ಲಿ ಹಿಂತೆಗೆದುಕೊಳ್ಳಬಹುದು.

1. ಅಧಿನಿಯಮ 1985ರ 37ರ ಮೂಲಕ 21.10.1985 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(5) ಮೇಲೆ ಹೇಳಿದ ಯಾವುದೇ ಬಾಕಿ ಮೊತ್ತದ ವಸೂಲಿಗಾಗಿ ಅದನ್ನು ವಸೂಲು ಮಾಡುವ ವ್ಯವಹರಣೆಗಳು ಜಿಲ್ಲಾಧಿಕಾರಿಯವರ ಮುಂದೆ ಇತ್ಯರ್ಥದಲ್ಲಿದ್ದರೆ, ಅದರಲ್ಲಿ ಉಲ್ಲೇಖಿಸಿದ ಯಾರೇ ವ್ಯಕ್ತಿಯ ವಿರುದ್ಧ ಸಿವಿಲ್ ನ್ಯಾಯಾಲಯದಲ್ಲಿ ಯಾವುದೇ ದಾವೆಯನ್ನು ಹೂಡಲು ಅವಕಾಶವಿರತಕ್ಕದ್ದಲ್ಲ:

ಪರಂತು, ಅಂಥ ಯಾವುದೇ ಮೊತ್ತವನ್ನು ನ್ಯಾಯಾಲಯದ ಮೂಲಕ ವಸೂಲಿ ಮಾಡಲು ಕಾಲಪರಿಮಿತಿ ಅವಧಿಯನ್ನು ಲೆಕ್ಕ ಹಾಕುವಾಗ, ಯಾವ ಅವಧಿಯಲ್ಲಿ ದಾವೆಯನ್ನು ನ್ಯಾಯಾಲಯದಲ್ಲಿ ದಾಖಲ್ಮಾಡಲು ಪ್ರತಿಷೇಧಿಸಲಾಗಿದೆಯೋ ಆ ಅವಧಿಯನ್ನು ಹೊರತುಪಡಿಸತಕ್ಕದ್ದು.

**4. ಉಳಿಸುವಿಕೆಗಳು.–** 3ನೇ ಪ್ರಕರಣದಲ್ಲಿ ಇರುವುದು ಯಾವುದೂ,–

(ಎ) ಯಾವುದೇ ಅಡಮಾನ, ಋಣಭಾರ, ಒತ್ತೆ ಅಥವಾ ಇತರ ಪೂರ್ವಾಧಿಯ ಮೂಲಕ ಯಾವುದೇ ಸ್ವತ್ತಿನಲ್ಲಿ ಸೃಜಿಸಲಾದ ರಾಜ್ಯ ಸರ್ಕಾರದ, ನಿಗಮದ, ಸರ್ಕಾರಿ ಕಂಪನಿಯ ಅಥವಾ ಯಾವುದೇ ಬ್ಯಾಂಕಿಂಗ್ ಕಂಪನಿಯ ಯಾವುದೇ ಹಿತಾಸಕ್ತಿಗೆ ಬಾಧಕ ಉಂಟುಮಾಡತಕ್ಕದ್ದಲ್ಲ; ಅಥವಾ

(ಬಿ) ಆ ಪ್ರಕರಣದಲ್ಲಿ ಉಲ್ಲೇಖಿಸಿದ ಒಪ್ಪಂದಕ್ಕೆ ಸಂಬಂಧಿಸಿದಂತೆ ಅಥವಾ (ಎ) ಖಂಡದಲ್ಲಿ ಉಲ್ಲೇಖಿಸಿದ ಯಾವುದೇ ಹಿತಾಸಕ್ತಿಗೆ ಸಂಬಂಧಿಸಿದಂತೆ ಮಾಡಿಕೊಂಡ ಕರಾರಿಗೆ ಅಥವಾ ನಷ್ಟ ಭರ್ತಿಗೆ ಅಥವಾ ಖಾತರಿಗೆ ಸಂಬಂಧಿಸಿದಂತೆ ಆ ಪ್ರಕರಣದಲ್ಲಿ ಉಲ್ಲೇಖಿಸಿದ ವ್ಯಕ್ತಿಯನ್ನು ಹೊರತುಪಡಿಸಿ ಯಾರೇ ವ್ಯಕ್ತಿಯ ಯಾವುದೇ ಹಕ್ಕಿಗೆ ಅಥವಾ ಪರಿಹಾರಕ್ಕೆ ಬಾಧಕವನ್ನುಂಟುಮಾಡತಕ್ಕದ್ದಲ್ಲ.

(2) 3ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಯಾರೇ ವ್ಯಕ್ತಿಯ ಸ್ವತ್ತು ರಾಜ್ಯ ಸರ್ಕಾರದ, ನಿಗಮದ, ಸರ್ಕಾರಿ ಕಂಪನಿಯ ಅಥವಾ ಬ್ಯಾಂಕಿಂಗ್ ಕಂಪನಿಯ ಹೆಸರಿಗೆ ಮಾಡಿದ ಯಾವುದೇ ಅಡಮಾನಕ್ಕೆ, ಋಣಭಾರಕ್ಕೆ, ಒತ್ತೆಗೆ ಅಥವಾ ಇತರ ಪೂರ್ವಾಧಿಗೆ ಒಳಪಟ್ಟಿರುವಲ್ಲಿ, ಆಗ,–

(ಎ) ಸರಕುಗಳನ್ನು ಒತ್ತೆ ಇಟ್ಟಿರುವ ಅಥವಾ ಅಡಮಾನ ಮಾಡಿರುವ ಪ್ರತಿಯೊಂದು ಸಂದರ್ಭದಲ್ಲೂ, ಒತ್ತೆ ಇಟ್ಟ ಅಥವಾ ಅಡಮಾನ ಮಾಡಿದ ಸರಕುಗಳ ಮಾರಾಟದ ಬಗ್ಗೆ ಮೊದಲು ವ್ಯವಹರಣೆಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಂಥ ಮಾರಾಟದಿಂದ ಬಂದ ಉತ್ಪತ್ತಿಗಳು ಬಾಕಿ ಇರುವ ಮೊತ್ತಕ್ಕಿಂತ ಕಡಿಮೆಯಿದ್ದರೆ, ಆಗ ಉಳಿದ ಶಿಲ್ಕನ್ನು ಭೂ ಕಂದಾಯದ ಬಾಕಿಯಾಗಿದ್ದರೆ ಹೇಗೋ ಹಾಗೆ ವಸೂಲು ಮಾಡಲು ವ್ಯವಹರಣೆಯನ್ನು ಕೈಗೊಳ್ಳತಕ್ಕದ್ದು:

ಪರಂತು, ರಾಜ್ಯ ಸರ್ಕಾರವು, ಸಂದರ್ಭಾನುಸಾರ, ತನಗೆ ಅಥವಾ ನಿಗಮಕ್ಕೆ, ಸರ್ಕಾರಿ ಕಂಪನಿಗೆ ಅಥವಾ ಬ್ಯಾಂಕಿಂಗ್ ಕಂಪನಿಗೆ ಬರಬೇಕಾದ ಬಾಕಿ ಮೊತ್ತದ ವಸೂಲಿಯನ್ನು ಭದ್ರಪಡಿಸಿಕೊಳ್ಳುವುದಕ್ಕಾಗಿ ಒತ್ತೆ ಇಟ್ಟ ಸರಕುಗಳನ್ನು ಮಾರಾಟ ಮಾಡಲು ಕ್ರಮವನ್ನು ಕೈಗೊಳ್ಳುವುದಕ್ಕೆ ಮುಂಚೆ ಅಥವಾ ಅದೇ ಸಮಯದಲ್ಲಿ ಬಾಕಿ ಇರುವ ಮೊತ್ತವನ್ನು ಭೂ ಕಂದಾಯದ ಬಾಕಿಯಂತೆ ವಸೂಲು ಮಾಡಲು ವ್ಯವಹರಣೆಗಳನ್ನು ಕೈಗೊಳ್ಳಬೇಕೆಂದು ನಿರ್ದೇಶಿಸುವುದು ಅವಶ್ಯಕವೆಂದು ಅಭಿಪ್ರಾಯಪಟ್ಟರೆ, ಅದು ಕಾರಣಗಳನ್ನು ದಾಖಲಿಸಿ ಹಾಗೆ ಮಾಡಬಹುದು.

(ಬಿ) ಸ್ಥಿರಸ್ವತ್ತಿನ ಅಡಮಾನ, ಋಣಭಾರ ಅಥವಾ ಇತರ ಪೂರ್ವಾಧಿ ಇರುವ ಪ್ರತಿಯೊಂದು ಸಂದರ್ಭದಲ್ಲಿ, ಸಂದರ್ಭಾನುಸಾರ, ಅಂಥ ಸ್ವತ್ತನ್ನು ಅಥವಾ ಅದರಲ್ಲಿ ಬಾಕಿದಾರನು ಹೊಂದಿರುವ ಹಿತಾಸಕ್ತಿಯನ್ನು, ಆ ವ್ಯಕ್ತಿಯು ಸಂದಾಯ ಮಾಡಬೇಕಾದ ಬಾಕಿ ಮೊತ್ತಕ್ಕಾಗಿ, ಭೂ ಕಂದಾಯದ ಬಾಕಿಯಾಗಿದ್ದರೆ ಹೇಗೋ ಹಾಗೆ ಅದನ್ನು ವಸೂಲಿ ಮಾಡುವ ವ್ಯವಹರಣೆಗಳಲ್ಲಿ ಮೊದಲು ಅದನ್ನು ಮಾರಾಟ ಮಾಡತಕ್ಕದ್ದು, ಮತ್ತು ಬಾಕಿ ಇರುವ ಇಡೀ ಮೊಬಲಗನ್ನು ಸೂಕ್ತ ಕಾಲದೊಳಗೆ ಮೊದಲು ಹೇಳಿದ ಕಾರ್ಯವಿಧಾನದ ಮೂಲಕ ವಸೂಲು ಮಾಡಲು ಸಾಧ್ಯವಿಲ್ಲವೆಂದು ಜಿಲ್ಲಾಧಿಕಾರಿಯು ಪ್ರಮಾಣೀಕರಿಸಿದ ತರುವಾಯ ಮಾತ್ರ ಯಾವುದೇ ಇತರ ವ್ಯವಹರಣೆಗಳನ್ನು ಕೈಗೊಳ್ಳಬಹುದು.

**5. ನಿಯಮವನ್ನು ರಚಿಸಲು ಅಧಿಕಾರ.–** ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ತರುವಾಯ ಅಧಿಸೂಚನೆಯ ಮೂಲಕ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವ ಸಲುವಾಗಿ ನಿಯಮಗಳನ್ನು ರಚಿಸಬಹುದು.

(2) ಈ ಪ್ರಕರಣದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನದಲ್ಲಿ ಅಥವಾ ಒಂದಾದಮೇಲೊಂದರಂತೆ ಅನುಕ್ರಮವಾಗಿ ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನದ ಅಥವಾ ಒಂದಾದ ಮೇಲೊಂದರಂತೆ ಅನುಕ್ರಮವಾಗಿ ಬರುವ ಅಧಿವೇಶನದ ನಿಕಟೋತ್ತರದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ ಆ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗಿರತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟುಮಾಡತಕ್ಕದ್ದಲ್ಲ.

**6. ನಿರಸನ ಮತ್ತು ಸಿಂಧುತ್ವ, ಇತ್ಯಾದಿ.–** (1) ಕರ್ನಾಟಕ ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1976 (ಕರ್ನಾಟಕ ಅಧಿನಿಯಮ ಸಂಖ್ಯೆ 1976ರ 79) ಇದನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

(2) ಯಾವುದೇ ನ್ಯಾಯಾಲಯದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶವೇನೇ ಇದ್ದರೂ, ಕರ್ನಾಟಕ ಸಾರ್ವಜನಿಕ ಹಣ (ಬಾಕಿ ವಸೂಲಿ) ಅಧಿನಿಯಮ, 1976ರ ಮೇರೆಗೆ (ಇಲ್ಲಿ ಇನ್ನು ಮುಂದೆ 1976ರ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) ಮಾಡಿದ ಯಾವುದೇ ಕಾರ್ಯವು ಅಥವಾ ಕೈಗೊಂಡ ಯಾವುದೇ ಕ್ರಮವು (ಯಾವುದೇ ಮೊಬಲಗನ್ನು ವಸೂಲು ಮಾಡಲು ಮಾಡಿದ ನಿಯಮಗಳು ಅಥವಾ ಆದೇಶಗಳು ಹೊರಡಿಸಿದ ನೋಟೀಸುಗಳು ಅಥವಾ ಪ್ರಮಾಣ

ಪತ್ರಗಳು ಮತ್ತು ಪ್ರಾರಂಭಿಸಿದ ಕ್ರಮಗಳೂ ಸೇರಿದಂತೆ) ಅಥವಾ ಮಾಡಲಾಗಿದೆಯೆಂದು ಅಥವಾ ಕೈಗೊಳ್ಳಲಾಗಿದೆಯೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯವು ಅಥವಾ ಕ್ರಮವು, ಅಂಥ ಕಾರ್ಯವನ್ನು ಅಥವಾ ಕ್ರಮವನ್ನು ಈ ಅಧಿನಿಯಮದ ಸಂವಾದಿ ಉಪಬಂಧಗಳ ಮೇರೆಗೆ ಮಾಡಲಾಗಿದ್ದರೆ ಅಥವಾ ಕೈಗೊಳ್ಳಲಾಗಿದ್ದರೆ ಹೇಗೋ ಹಾಗೆ ಸಿಂಧುವಾಗಿದೆಯೆಂದು ಅಥವಾ ಪರಿಣಾಮಕಾರಿಯಾಗಿದೆಯೆಂದು ಭಾವಿಸತಕ್ಕದ್ದು. ಈ ಅಧಿನಿಯಮದ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ 1976ರ ಜೂನ್ 15ನೇ ದಿನದಂದು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು ಮತ್ತು ತದನುಸಾರವಾಗಿ 1976ರ ಅಧಿನಿಯಮವನ್ನು ರಾಷ್ಟ್ರಪತಿಯವರ ಸಮ್ಮತಿಗಾಗಿ ಕಾಯ್ದಿರಿಸಿಲ್ಲದಿರುವುದರಿಂದ ಮತ್ತು ರಾಷ್ಟ್ರಪತಿಯವರ ಸಮ್ಮತಿ ಪಡೆದಿಲ್ಲದಿರುವುದರಿಂದ ಸದರಿ ಅಧಿನಿಯಮವು ಸಂವಿಧಾನ ಬಾಹಿರವಾಗಿದೆ ಎಂಬ ಅಥವಾ ಶೂನ್ಯವಾಗಿದೆ ಎಂಬ ಕಾರಣದ ಮೇಲೆ 1976ರ ಅಧಿನಿಯಮದ ಮೇರೆಗೆ ಮಾಡಿದ ಅಥವಾ ಕೈಗೊಂಡ ಅಥವಾ ಮಾಡಲಾಗಿದೆಯೆಂದು ಅಥವಾ ಕೈಗೊಳ್ಳಲಾಗಿದೆಯೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯದ ಅಥವಾ ಕ್ರಮದ ಸಿಂಧುತ್ವವನ್ನು ಪ್ರಶ್ನಿಸಿ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ದಾವೆಯನ್ನು ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ ಅಥವಾ ಮುಂದುವರೆಸತಕ್ಕದ್ದಲ್ಲ.

The above translation of the Karnataka Public Moneys (Recovery of Dues) Act, 1979 (Karnataka Act 16 of 1980) shall be authoritative text in the Kannada Language under section 5A of the Karnataka Official Language Act, 1963.

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 524

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಕಾಇ 4 ಕಾಬಾಸೇ 2009, ಬೆಂಗಳೂರು, ದಿನಾಂಕ:25ನೇ ಆಗಸ್ಟ್ 2009**

ಇಂಡಿಯನ್ ಬಾಯ್ಲರ್ಸ್ ಕಾಯ್ದೆ, 1923 ಕೇಂದ್ರ ಕಾಯ್ದೆ, 1923ರ ಸಂಖ್ಯೆ (5)ರ ಕಲಂ 29 ಮತ್ತು ಬಾಯ್ಲರುಗಳ ಅಟೆಂಡೆಂಟ್ಸ್ ನಿಯಮಗಳು 1962ರ ನಿಯಮಗಳು 9 (1), (2) ಮತ್ತು (10)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಕರ್ನಾಟಕ ಸರ್ಕಾರವು ಈ ಕೆಳಕಂಡವರನ್ನೊಳಗೊಂಡ ಬಾಯ್ಲರ್ ಅಟೆಂಡೆಂಟ್‌ಗಳ ಪರೀಕ್ಷಾ ಮಂಡಳಿಯನ್ನು ಮೂರು ವರ್ಷಗಳ ಅವಧಿಯವರೆಗೆ ರಚಿಸಿ ಆದೇಶಿಸಿದೆ.

| ಕ್ರ.ಸಂ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ, ಕಾರ್ಮಿಕ ಭವನ, 2ನೇ ಮಹಡಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 | ಪದನಿಮಿತ್ತ ಅಧ್ಯಕ್ಷರು |
| 2 | ಬಾಯ್ಲರುಗಳ ಸಹಾಯಕ ನಿರ್ದೇಶಕರು, ಬಾಯ್ಲರ್ ಟೆಸ್ಟಿಂಗ್ ಅಂಡ್ ಎಕ್ಸಾಮಿನೇಷನ್ ಸೆಲ್, ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |
| 3 | ಶ್ರೀ ಸುರೇಂದ್ರ ಕುಮಾರ್ ವರ್ಮಾ,<br>ಅಸೋಸಿಯೇಟ್ ವೈಸ್ ಪ್ರೆಸಿಡೆಂಟ್ (ಇಂಜಿನಿಯರಿಂಗ್), ಮೆ: ಜುಬಿಲೆಂಟ್ ಆರ್ಗೋನೋಸಿಸ್ ಲಿ., ನಂ. 56, ಇಂಡಸ್ಟ್ರಿಯಲ್ ಏರಿಯಾ, ನಂಜನಗೂಡು, ಮೈಸೂರು –571302. | ಸದಸ್ಯರು |
| 4 | ಶ್ರೀ ಟಿ.ವಿ. ವಿಶ್ವನಾಥ್,<br>ಮ್ಯಾನೇಜಿಂಗ್ ಪಾರ್ಟ್ನರ್,<br>ಮೆ:ವಿ.ಆರ್. ಅಂಡ್ ಬ್ರದರ್ಸ್, ಪ್ಲಾಟ್ ನಂ. 17, ಮೇಟಗಳ್ಳಿ, ಕೆ.ಆರ್.ಎಸ್. ರಸ್ತೆ ಮೈಸೂರು–570016. | ಸದಸ್ಯರು |
| 5 | ಶ್ರೀ ಎಲ್.ಎನ್. ಹನುಮಂತ ರೆಡ್ಡಿ,<br>ಡೆಪ್ಯೂಟಿ ಮ್ಯಾನೇಜರ್, ಬೆಂಗಳೂರು ಡೈರಿ, ಡಾ. ಎಂ.ಹೆಚ್. ಮರಿಗೌಡ ರಸ್ತೆ, ಬೆಂಗಳೂರು–560029 | ಸದಸ್ಯರು |

| ಕ್ರ.ಸಂ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 6 | ಶ್ರೀ ಎಂ.ವಿ. ಕಾಂತರಾಜು,<br>ನಂ. 17, 2ನೇ ಅವಿನ್ಯೂ, ಪೋರ್ಟ್ ಕಾಲೋನಿ, ಹೊಸಬೆಟ್ಟು, ಕುಲಾಯ್ ಪೋಸ್ಟ್, ಮಂಗಳೂರು–575026 | ಸದಸ್ಯರು |
| 7 | ಶ್ರೀ ವಿ. ಗೋವಿಂದರಾಜು,<br>ಅಸಿಸ್ಟೆಂಟ್ ಜನರಲ್ ಮ್ಯಾನೇಜರ್ ಆಪರೇಷನ್ (ಸ್ಪೀಂ ಪ್ಲಾಂಟ್), ನಂ.ಸಿ–5, ಹಿಂಡಾಕೊ ಕಾಲೋನಿ, ನೆಹರು ನಗರ ಪೋಸ್ಟ್, ಬೆಳಗಾಂ–590010. | ಸದಸ್ಯರು |
| 8 | ಶ್ರೀ ಪ್ರತಾಪ್ ಆರ್.<br>ನಂ.ಸಿ–16/5, ಗ್ರಾಸಿಂ ಸ್ಟಾಫ್ ಕಾಲೋನಿ, ಕುಮಾರಪಟ್ಟಣಂ–581123, ಹಾವೇರಿ ಜಿಲ್ಲೆ | ಸದಸ್ಯರು |
| 9 | ಶ್ರೀ ಎಂ.ವಿ. ಶೇಷಾದ್ರಿ,<br>ಡೆಪ್ಯೂಟಿ ಜನರಲ್ ಮ್ಯಾನೇಜರ್ (ಪ್ರೊಡಕ್ಷನ್ ಅಂಡ್ ಯುಟಿಲಿಟೀಸ್), ಕರ್ನಾಟಕ ಸೋಪ್ಸ್ ಅಂಡ್ ಡಿಟರ್ಜೆಂಟ್ಸ್ ಲಿಮಿಟೆಡ್, ಬೆಂಗಳೂರು–560055. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಶಿವರಾಮ ಗೌಡ**

ಪಿ.ಆರ್. 525 ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ವಾಕೈ 37 ರೇಉನಿ 2009, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್, 2009**

ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ಆರ್ಟಿಕಲ್ ಆಫ್ ಅಸೋಸಿಯೇಷನ್ ಆರ್ಟಿಕಲ್ 8(ಎ)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಪರಮೇಶ್ ಪಾಂಡೆ, ಭಾಆಸೇ., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರನ್ನು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಗೆ ನಿರ್ದೇಶಕರನ್ನಾಗಿ ಶ್ರೀ ಜಿ.ಎಲ್. ಚಂದ್ರಶೇಖರಯ್ಯ, ಭಾಆಸೇ., ಹಿಂದಿನ ವ್ಯವಸ್ಥಾಪಕ ನಿರ್ದೇಶಕರು ಇವರ ಸ್ಥಾನದಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪಿ.ಆರ್. 526 ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ನಅಇ 125 ಎಂಎಲ್‌ಆರ್ 2008 (C–36), ಬೆಂಗಳೂರು, ದಿನಾಂಕ: 29ನೇ ಆಗಸ್ಟ್, 2009**

ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 352 (1b) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಿದ್ದಾಪುರ ಪಟ್ಟಣ ಪಂಚಾಯಿತಿಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಸುರೇಶ ತಿಮ್ಮಪ್ಪ ನಾಯ್ಕ, ರವೀಂದ್ರನಗರ, ಸಿದ್ದಾಪುರ (ಉ.ಕ)
2. ಶ್ರೀಮತಿ ರೇಣುಕಾ ಬಸವರಾಜ ಮಡಿವಾಳ, ಕೊಂಡ್ಲಿ, ಸಿದ್ದಾಪುರ (ಉ.ಕ)
3. ಶ್ರೀ ಚಂದ್ರಶೇಖರ ಹನುಮಂತಪ್ಪ, ಲಮಾಣಿ ಹಾಳದಕಟ್ಟಾ, ಕೊಂಡ್ಲಿ, ಸಿದ್ದಾಪುರ (ಉ.ಕ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್. ರವೀಂದ್ರ**

ಪಿ.ಆರ್. 527 ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 201 ಎಂಆರ್‌ಇ 2009, ಬೆಂಗಳೂರು, ದಿನಾಂಕ: 31ನೇ ಆಗಸ್ಟ್, 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1)(ix) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಹೊಸಪೇಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ.

| ಕ್ರ.ಸಂ | ಸದಸ್ಯರ ಹೆಸರು |
|---|---|
| 1 | ಶ್ರೀ ಪಿ. ಬಾಬು ತಂದೆ, ಶ್ರೀ ಪಿ. ವೆಂಕಟಪತಿ,<br>ಕಮಲಾಪುರ, ಹೊಸಪೇಟೆ ತಾಲ್ಲೂಕು. ಬಳ್ಳಾರಿ ಜಿಲ್ಲೆ |
| 2 | ಶ್ರೀಮತಿ ಉಷಾ ಕೋಂ ಶ್ರೀ ಪಂಪಾಪತಿ,<br>31ನೇ ವಾರ್ಡ್, ನೆಹರೂ ಕಾಲೋನಿ, ಹೊಸಪೇಟೆ ನಗರ, ಬಳ್ಳಾರಿ ಜಿಲ್ಲೆ |
| 3 | ಶ್ರೀ ಬಿ. ರಾಘವೇಂದ್ರ ಶೆಟ್ಟಿ, ತಂದೆ ಶ್ರೀ ಬಿ. ಶೀನಪ್ಪ ಶೆಟ್ಟಿ<br>ಜೆ.ಪಿ.ನಗರ, ವಾಸವಿ ಹೈಸ್ಕೂಲ್ ಹತ್ತಿರ,<br>ಹೊಸಪೇಟೆ ನಗರ, ಬಳ್ಳಾರಿ ಜಿಲ್ಲೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವಮೂರ್ತಿ**

ಪಿ.ಆರ್. 528 ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ತಿದ್ದೋಲೆ ಸಂಖ್ಯೆ: ಸಿಆಸುಇ 312 ಸಅಸೇ 2009, ಬೆಂಗಳೂರು, ದಿನಾಂಕ: 24ನೇ ಆಗಸ್ಟ್ , 2009**

ಅಧಿಸೂಚನೆ ಸಂಖ್ಯೆ ಸಿಆಸುಇ 596 ಸಅಸೇ 2007, ದಿನಾಂಕ:20.5.2009ರಲ್ಲಿ 4ನೇ ಸಾಲಿನಲ್ಲಿ "ಕರ್ನಾಟಕ ನಾಗರೀಕ ಸೇವಾ (ಆರ್‌ಪಿಪಿ) ನಿಯಮಾವಳಿ 1957 ನಿಯಮ 2(ಎ)" ಎಂಬುದರ ಬದಲಾಗಿ "ಕರ್ನಾಟಕ ನಾಗರೀಕ ಸೇವಾ (ಆರ್‌ಪಿಪಿ) ನಿಯಮಾವಳಿ 1978 ರ ನಿಯಮ 2(1)(ಎ)" ಎಂದು ತಿದ್ದಿ ಓದಿಕೊಳ್ಳತಕ್ಕದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 529 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ನಅಇ 125 ಎಂಎಲ್ ಆರ್ 2008 (B-61), ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್, 2009**

ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 11(1)(**b**) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಶ್ರೀರಂಗಪಟ್ಟಣ ಪುರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಎನ್. ಲಕ್ಷ್ಮೀನಾರಾಯಣ ಬಿನ್ ಎ.ಆರ್. ನಾಗರಾಜು, ಕೇರಾಫ್ ರಾಮಕೃಷ್ಣ ನಿವೃತ್ತ ಶಿಕ್ಷಕರು, ಕಾಳಮ್ಮಗುಡಿ ಬೀದಿ, ಶ್ರೀರಂಗಪಟ್ಟಣ
2. ಶ್ರೀ ಎಸ್. ಶೇಷಾದ್ರಿ ಬಿನ್ ಶಂಕರ್, ಬಂಡಿಕೇರಿ ಬೀದಿ, ಶ್ರೀರಂಗಪಟ್ಟಣ
3. ಶ್ರೀಮತಿ ಮಮತ ಕೋಂ ಮಹದೇವಸ್ವಾಮಿ, ಪೇಟೆ ಬೀದಿ, ಗಂಜಾಂ, ಶ್ರೀರಂಗಪಟ್ಟಣ
4. ಶ್ರೀ ಚೆಲುವರಾಜು ಬಿನ್ ವೈರಮುಡಿಯ್ಯ, ಕರೀಘಟ್ಟ ರಸ್ತೆ, ಗಂಜಾಂ, ಶ್ರೀರಂಗಪಟ್ಟಣ
5. ಶ್ರೀ ಆರುಗ್ಗ ಉ. ಕಿಶೋರ್ ಬಿನ್ ಕುಪ್ಪಣ್ಣ, ಎಸ್. 1616, ಗಾಂಧಿನಗರ, ಶ್ರೀರಂಗಪಟ್ಟಣ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್. ರವೀಂದ್ರ**

ಪಿ.ಆರ್. 530 ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ನಅಇ 125 ಎಂಎಲ್‌ಆರ್ 2008 (B-63), ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್, 2009**

ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 11(1)(**b**) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮಾಗಡಿ ಪುರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಎಂ.ಆರ್. ರಾಘವೇಂದ್ರ ಬಿನ್ ವರದರಾಜು, ನೇಯ್ಗೆ ಬೀದಿ, ವಾರ್ಡ ನಂ. 17, ಮಾಗಡಿ, ರಾಮನಗರ ಜಿಲ್ಲೆ
2. ಶ್ರೀಮತಿ ಜಯಮ್ಮ ಕೋಂ ಅಶ್ವಥ್, ಕೊಟ್ಟಣಗೆರೆ ಬೀದಿ, ವಾರ್ಡ ನಂ. 20, ಕೆಂಪೇಗೌಡ ಸರ್ಕಲ್, ಮಾಗಡಿ, ರಾಮನಗರ ಜಿಲ್ಲೆ
3. ಶ್ರೀ ಹೆಚ್.ಕೆ. ಲೋಕೇಶ್ ಬಿನ್ ಹೆಚ್.ಬಿ. ಕೃಷ್ಣಪ್ಪ, ಜವರಪ್ಪ ಗಲ್ಲಿ, ಹೊಸಪೇಟೆ, ಮಾಗಡಿ, ರಾಮನಗರ ಜಿಲ್ಲೆ
4. ಶ್ರೀ ರೇಣುಕಪ್ಪ ಬಿನ್ ಲೇ. ಪರ್ವತಪ್ಪ, ಅರಳೇಪೇಟೆ, 3ನೇ ಅಡ್ಡರಸ್ತೆ, ಮಾಗಡಿ, ರಾಮನಗರ ಜಿಲ್ಲೆ.
5. ಶ್ರೀ ಶಶಿಧರ ಬಿನ್ ವೆಂಕಟೇಶಪ್ಪ, ಸೋಮೇಶ್ವರ ಕಾಲೋನಿ, ವಾರ್ಡ ನಂ. 14, ಮಾಗಡಿ, ರಾಮನಗರ ಜಿಲ್ಲೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್. ರವೀಂದ್ರ**

ಪಿ.ಆರ್. 531 ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ನಅಇ 125 ಎಂಎಲ್ ಆರ್ 2008 (C-28), ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್, 2009**

ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 352(1**b**) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತುರುವೇಕೆರೆ ಪಟ್ಟಣ ಪಂಚಾಯಿತಿಗೆ ಸರ್ಕಾರವು ಅಧಿಸೂಚನೆ ಸಂಖ್ಯೆ:ನಅಇ 125 ಎಂಎಲ್‌ಆರ್ 2008 (**C-28**) ದಿನಾಂಕ:28.5.2009ರಲ್ಲಿ 3 ಜನರನ್ನು ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಗುಬ್ಬಿ ಪಟ್ಟಣ ಪಂಚಾಯಿತಿಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಆರ್. ನರಸಿಂಹಮೂರ್ತಿ ಬಿನ್ ಡಿ. ರಂಗಣ್ಣ, ಹೊಸ ಎ.ಕೆ. ಕಾಲೋನಿ, ಗುಬ್ಬಿ
2. ಶ್ರೀ ಜಿ.ಆರ್. ಬಸವರಾಜು ಬಿನ್ ಜಿ.ಪಿ. ರಾಮಲಿಂಗಪ್ಪ, ಸಿಡಿಲು ಬಸವೇಶ್ವರನಗರ, ಗುಬ್ಬಿ
3. ಶ್ರೀಮತಿ ತಾರಾಮಣಿ ಕೋಂ ಜಿ.ಎಚ್. ಕುಮಾರ್, ಜ್ಯೋತಿನಗರ, ಗುಬ್ಬಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್. ರವೀಂದ್ರ**

ಪಿ.ಆರ್. 532 ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ನಅಇ 125 ಎಂಎಲ್‌ಆರ್ 2008 (C-34), ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್, 2009**

ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 352(1**b**) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಗುರುಮಿಠಕಲ್ ಪಟ್ಟಣ ಪಂಚಾಯಿತಿಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ವಿಶ್ವನಾಥ ಬಿನ್ ನರಪ್ಪ, ಗುರುಮಿಠಕಲ್.
2. ಶ್ರೀಮತಿ ರುಕ್ಮೀಣಿ ಕೋಂ ಭೀಮಾ ನಿರಾಟೆ ಜಣಿ, ಗುರುಮಿಠಕಲ್.
3. ಶ್ರೀ ಹುಸೇನಪ್ಪ ಬಿನ್ ಶಂಕರಪ್ಪ, ಗುರುಮಿಠಕಲ್.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್. ರವೀಂದ್ರ**

ಪಿ.ಆರ್. 533 ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ನಅಇ 125 ಎಂಎಲ್‌ಆರ್ 2008 (C-35), ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್, 2009**

ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 352(1**b**) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಲೂರು ಪಟ್ಟಣ ಪಂಚಾಯಿತಿಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಕರಿಯಯ್ಯ ಬಿನ್ ವೀರಭದ್ರಯ್ಯ, ಅಂಬೇಡ್ಕರ್ ಕಾಲೋನಿ, ಆಲೂರು
2. ಶ್ರೀ ಶಿವಮೂರ್ತಿ ಬಿನ್ ಚಿಕ್ಕೇಗೌಡ, ಮರಸು ಕೊಪ್ಪಲ್, ಆಲೂರು ಪೋಸ್ಟ್
3. ಶ್ರೀ ಎ.ಹೆಚ್. ಲಕ್ಷ್ಮಣ್ ಬಿನ್ ಹನುಮೇಗೌಡ, ಹಳೇ ಆಲೂರು, ಆಲೂರು ಪೋಸ್ಟ್

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್. ರವೀಂದ್ರ**

ಪಿ.ಆರ್. 534 ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ ಸಂಖ್ಯೆ: ನಅಇ 125 ಎಂಎಲ್‌ಆರ್ 2008 (A-32), ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್, 2009**

ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 11(1)(**b**) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಯಾದಗಿರಿ ನಗರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಸ್ವಾಮಿದೇವ್ ಬಿನ್ ಹನುಮಂತದಾಸನಕೇರಿ, ಅಂಬೇಡ್ಕರ್ ನಗರ, ಯಾದಗಿರಿ
2. ಶ್ರೀ ವಿನೋದ್ ಜೈನ್, ಗಾಂಧಿಚೌಕ ಮೈನ್ ರಸ್ತೆ, ಯಾದಗಿರಿ
3. ಶ್ರೀ ಅಂಬರೀಶ್ ಗಡ್ಡಿಮನಿ, ಬಸವೇಶ್ವರನಗರ, ಯಾದಗಿರಿ
4. ಶ್ರೀಮತಿ ವೀಣಾಮೋದಿ, ವೀರಶೈವ ಕಲ್ಯಾಣ ಮಂಟಪ, ಯಾದಗಿರಿ
5. ಶ್ರೀ ಪೀರು ಅಹಮದ್, ಕೊಲಿವಾಡ, ಯಾದಗಿರಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್. ರವೀಂದ್ರ**

ಪಿ.ಆರ್. 535 ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ ಸಂಖ್ಯೆ: ನಅಇ 194 ಬೆಂರೂಪ್ರಾ 2009, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್, 2009**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4(ಸಿ) ಉಪ ಪ್ರಕರಣದ 3(i) ಮತ್ತು (iv) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡವರನ್ನು ನೆಲಮಂಗಲ ಯೋಜನಾ ಪ್ರಾಧಿಕಾರದ ಅಧ್ಯಕ್ಷರು ಹಾಗೂ ಸದಸ್ಯರನ್ನಾಗಿ ಸರ್ಕಾರದ ಇಚ್ಛಾನುಸಾರ ಅಥವಾ ಮೂರು ವರ್ಷಗಳ ಅವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ಶ್ರೀ ಆನಂದ್ ಕೆ.ಪಿ. ಬಿನ್ ಪುಟ್ಟಯ್ಯ, ಮಾಜಿ ಗ್ರಾ.ಪಂ. ಅಧ್ಯಕ್ಷರು, ಕನಕೇನಹಳ್ಳಿ, ಎಣ್ಣೆಗೆರೆ ಅಂಚೆ, ಸೋಲೂರು ಹೋಬಳಿ | ಅಧ್ಯಕ್ಷರು |
| 2. | ಜಿ. ನಾಗರಾಜು ಬಿನ್ ಚಿಕ್ಕಗಂಗಭೈರಯ್ಯ, ನರಸೀಪುರ ಅಂಚೆ, ಸೋಂಪುರ ಹೋಬಳಿ | ಸದಸ್ಯರು |
| 3 | ಶ್ರೀ ಮಂಜುನಾಥ್ ನಂ. 67, 1ನೇ ಮುಖ್ಯರಸ್ತೆ, ಸದಾಶಿವನಗರ, ನೆಲಮಂಗಲ | ಸದಸ್ಯರು |
| 4. | ಶ್ರೀ ಡಿ. ಚಿಕ್ಕಣ್ಣ ಬಿನ್ ದೊಡ್ಡಯ್ಯ, ಯೆಂಟಗಾನಹಳ್ಳಿ, ಮಹದೇವಪುರ, ಕಸಬಾ ಹೋಬಳಿ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 536 **ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.